ಒಂದಾಣೆ ಮಾಲೆ 264

# ಬಾಲರ ಬಾನುಲಿ

## (ಕವನ ಸಂಕಲನ)

(ಪ್ರಾಥಮಿಕ ಶಾಲಾ ಮಕ್ಕಳಿಗಾಗಿ)



ರಚಯಿತ:
ಶ್ರೀ। ಎ. ಶ್ರೀನಿವಾಸ ಭಟ್, ಮಂಗಳೂರು.



1960

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

# ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1960ನೇ ಜನವರಿ ತಿಂಗಳ ನಾಲ್ಕನೆಯ ವಾರದ ವರೆಗೆ 264 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕವು ಹೊರಡುತ್ತಲೇ ಇದೆ.

264 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 5030 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆ ಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ 'ಒಂದಾಣೆ ಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

# ಬಾಲರ ಬಾನುಲಿ

## (ಕವನ ಸಂಕಲನ)

........

### ಪ್ರಾರ್ಥನೆ

ದೇವ ದೇವನೆ ಲೋಕದೊಡೆಯನೆ
ನಿನಗೆ ವಂದನೆ ವಂದನೆ
ಕರವ ಜೋಡಿಸಿ ಶಿರವ ಬಾಗಿಸಿ
ದೊರೆಯೆ ವಂದನೆ ವಂದನೆ

ಹಿಂದು ಮುಸ್ಲಿಮ ಜೈನ ಕ್ರೈಸ್ತರು
ಬೌದ್ಧರೆಂಬುದ ದೂಡುತ–
ಭಾರತಾಂಬೆಯ ಬಳಗವೆಲ್ಲರು
ಒಟ್ಟು ನಡೆವೆವು ಕೂಡುತ

ಸುಳ್ಳು, ವಂಚನೆ, ಮೋಸ, ಹಿಂಸೆಯ
ತಳ್ಳಿ ಸತ್ಯದಿ ನಡೆಯುವ—
ಒಳ್ಳೆ ಬುದ್ಧಿಯ ದೇವ ಪಾಲಿಸು
ನಮ್ಮನೆಲ್ಲರ ಪೊರೆಯುತ

ನಾಡಸೇವೆಗೆ ನುಡಿಯ ನೋಲ್ಮೆಗೆ
ಕಾಯಕಷ್ಟದಿ ದುಡಿವೆವು
ಈಶ ನಮ್ಮನು ನಿತ್ಯ ಪೊರೆಯೈ
ಭಕುತಿಯಿಂದಲಿ ನಮಿಪೆವು.

---

## ಕನ್ನಡ ಮಾತೆ

("ಮಿಸ್ಸಮ್ಮ" ಚಿತ್ರದ 'ವೃಂದಾವನವುಂ ನಂದಕುಮಾರನು' ಎಂಬಂತೆ)

ಪಾವನಮಾತೆಯು ಪರಮಪುನೀತೆಯು
ನಾಡಿನ ದೇವಿಯು ಕನ್ನಡವು
ಸನ್ನುತ ಮಹಿಮೆಯ ಉನ್ನತ ಹಿರಿಮೆಯ
ಚಿನ್ಮಯಮೂರ್ತಿಯು ಕನ್ನಡವು

ಅರಿಮೆಯು ಪೆಂಪಲಿ ಧರೆಯೊಳು ಸೊಂಪಲಿ
ಮೆರೆಯುವ ನಾಡಿದು ಕನ್ನಡವು
ಅಳಿಯದ ಶೋಭೆಯ ಸುಂದರ ಶಿಲ್ಪದ
ಕಳೆಗಳ ಕಳಸವು ಕನ್ನಡವು

ಸಂಪಿಗೆ ಮಲ್ಲಿಗೆ ಕೇದಗೆ ಸುರಗಿಯ
ಕಂಪಿನ ತಂಪಿನ ಕನ್ನಡವು
ವರಕಾವೇರಿಯ ಕೃಷ್ಣೆಯ ಗೋದೆಯ
ಹರಿವಿನ ನೆಲವಿದು ಕನ್ನಡವು

ಕ್ಷೇತ್ರಗಳೆಸೆಯುವ ತೀರ್ಥವು ಹರಿಯುವ
ಯಾತ್ರೆಯ ಭೂಮಿಯು ಕನ್ನಡವು
ಕವಿಗಳು ಉದಿಸಿದ ವೀರರು ಮೆರೆದಿಹ
ಭುವಿಯಿದು ನಮ್ಮಯ ಕನ್ನಡವು

---

## ಶಾಂತಿದೂತ

ಭಾರತಾಂಬೆ ಹಡೆದ ರತುನ
ನೆಹರು ನಾಡಜ್ಯೋತಿಯು!
ಪುಣ್ಯಪುರುಷನೆನಿಸಿ ಮೆರೆವ
ಗಣ್ಯ ಮಾನ್ಯ ಮೂರ್ತಿಯು!

ಮಾತೆ ಸೇವೆ ನಿತ್ಯಗೈದು
ಖ್ಯಾತಿಯನ್ನು ಗಳಿಸಿದೆ
ಶಾಂತಿ ಸತ್ಯ ಜಗಕೆ ಸಾರಿ
"ಶಾಂತಿದೂತ"ನೆನಿಸಿದೆ

ಧೈರ್ಯದಲ್ಲಿ ಶೌರ್ಯದಲ್ಲಿ
ನೀನೆ ಹಿರಿಯ ವ್ಯಕ್ತಿಯು
ಕಾರ್ಯಗೈವ ಜಾಣತನದಿ
ಹಿರಿದು ನಿನ್ನ ಶಕ್ತಿಯು

ದೇಶಭಕ್ತ ಸರ್ವಶಕ್ತ
ಜವಾಹರನೆ ನಮಿಸುವೆ
ವಂದ್ಯ ನಿನ್ನ ಹಿರಿಯತನಕೆ
ಮಣಿಯುತಿಹುದು ಲೋಕವೆ

---

## "ಸೀರಯೋಗಿ"

(ಅಭಿನಯ)

ಹಳ್ಳಿಯಲ್ಲಿ ನೆಲಸುತಿರುವೆ
ಕೃಷಿಯ ಮಾಡಿ
ಹೊಲದಿ ನಿತ್ಯ ಗೇಯುತಿರುವೆ
ದಿನವ ದೂ–ಡಿ

ಬೆಳಗಿನಿಂದ ಬೈಗು ವರೆಗು
ಕೆಲಸ ಗೈ–ದು
ಮಿಾಯುತಿರುವೆ ಬೆವರಿನಲ್ಲಿ
ತೋದು ತೋ-ದು

ಹಳ್ಳಿಯೂರ ಮರುಕು ಗುಡಿಸ
ಲೆನ್ನದೆ-ಲ್ಲ
ಇಹುದರಲ್ಲೆ ತೃಪ್ತಿ ಪಡೆವೆ
ದೇವ ಬ–ಲ್ಲ

ಜನತೆಯೆನ್ನ "ಸೀರಯೋಗಿ"
ಎನುವರ-ಲ್ಲ
"ಕೃಷಿಯಋಷಿ"ಯುನಿತ್ಯಸುಖವು
ಎನಗೆ ಇ-ಲ್ಲ

ಹರುಕುಮುರುಕುಸರುಕು ಎನ್ನ
ಬದುಕು ಅ-ಲ್ಲ
ಪಾಡುಪಡುವ ಎನ್ನ ಗೋಳು
ಕೇಳ್ವರಿ-ಲ್ಲ

---

## ಸುಗ್ಗಿ ಬಂದಿತು

(ಲೇಜಿಮ್, ಕೋಲಾಟಗಳಲ್ಲಿ ಉಪಯೋಗಿಸಬಹುದು)

ಬಂತು ಸುಗ್ಗಿಯು ಬಂತು ಸುಗ್ಗಿಯು
ಹೊಲವ ನೆಲವ ಹಸುರುಗೊಳಿಸಿ
ಬಂತು ಸುಗ್ಗಿಯು
ಬಂತು ಸುಗ್ಗಿಯು

ಬನಕೆ ಚಿಗುರಿನಃ ಬಣ್ಣ ಹಸುರಿನಃ
ಕಳೆಯು ನೀಡಿ ಜಗಕೆ ಒಡಿ
ಬಂತು ಸುಗ್ಗಿಯುಃ
ಬಂತು ಸುಗ್ಗಿಯುಃ

ಗಿಡಕೆ ಸುಮವನುಃ ಧರೆಗೆ ಚೆಲುವನುಃ
ತೋರಿ ಬೀರಿ ಕಂಪ ಸೊಂಪ
ಬಂತು ಸುಗ್ಗಿಯುಃ
ಬಂತು ಸುಗ್ಗಿಯುಃ

ಕೊಳಕು ಕಳೆಯಿಸಿಃ ಚೆಲುವ ಬೆಳೆಯಿಸಿಃ
ಜಗವನೀಗ ಬೆಳಗಿ ಬೇಗ
ಬಂತು ಸುಗ್ಗಿಯುಃ
ಬಂತು ಸುಗ್ಗಿಯುಃ

## ಕೋಗಿಲೆ

ಪಚ್ಚೆಯ ಮರೆಯಲಿ
ಮೆಚ್ಚುಗೆ ಸರದಲಿ
ನೆಚ್ಚಿನ ಪಿಕವದು ಹಾಡುತಿದೆ
ವಸಂತ ಕಾಲದಿ
ಪ್ರಶಾಂತ ಸಮಯದಿ
ಬಸಂತನೊಸಗೆಯ ಸಾರುತಿದೆ

ಕಿನ್ನರಿಯಂದದ
ಕಿನ್ನರ ಕಂಠದ
ನಿನ್ನಯ ರಾಗಕೆ ಮಿಗಿಲುಂಟೆ
ಬೇಸರ ಕಳೆಯುವ
ಆಸರೆಯೊಯುವ
ತೋಷದ ಹಾಡಿಗೆ ಎಣೆಯುಂಟೆ

ಎಲ್ಲಾ ದಿನದಲಿ
ನಿಲ್ಲದೆ ಸಾಗಲಿ
ನಿನ್ನಯ ಕೊರಳಿನ ಇಂಚರವು

ರೂಪಿಗೆ ಹಳಿದರೆ
ರಾಗಕೆ ಹಳಿವರೆ
ಸಾಗಲಿ ನಿನ್ನಯ ಗಾಯನವು

## ಬಾಪೂಜಿ




ನಮ್ಮ ದೇಶದಲ್ಲಿ ಜನಿಸಿ
ನಾಡಿಗಾಗಿ ಜೀವ ಸವೆಸಿ
ಕೀರ್ತಿಯೆನುವ ಪೆಣ್ಣವರಿಸಿ
ಜಗದ ಜನಕೆ ಹಿರಿಯನೆನಿಸಿ
ಬೆಳಗಿ ಮೆರೆದ ಬಾಪುಜಿ
ಮಾತೆ ಭಕುತ ಗಾಂಧಿಜಿ

ಪರರ ಬಾಧೆಯನ್ನು ಬಿಡಿಸಿ
ಕೀರ್ತಿ ಕುಡಿಯು ತಾನು ಬೆಳೆಸಿ
ಸತ್ಯಶಾಂತಿ ಮಂತ್ರ ಜಪಿಸಿ
ನಿತ್ಯ ಜಗಕೆ ಪೂಜ್ಯನೆನಿಸಿ
ಪರರ ಗೆಲಿದ ಬಾಪುಜೀ
ವಿನಯಮೂರ್ತಿ ಗಾಂಧಿಜೀ

ಚರಕದಿಂದ ನೂಲ ತೆಗೆದು
ತನ್ನ ಉಡುಪು ತಾನೆ ಗೈದು
ನಾಡಜನರಿಗಿದನೆ ತೋರಿ
ಶಾಂತಿ ತತ್ವ ಜಗಕೆ ಸಾರಿ
ಅಮರನಾದ ಬಾಪುಜೀ
ಪರಮಪೂಜ್ಯ ಗಾಂಧಿಜೀ

ಪಾಡುಪಡುವ ದೀನಜನರ
ಕಂಡು ಕರುಣೆಯಿಂದಲವರ
ಹಿತವ ಬಯಸಿ ದುಡಿದೆಯಣ್ಣ
ಗಾಂಧಿ ತಾತ ಲೋಕಮಾನ್ಯ
ವಿಶ್ವವಂದ್ಯ ಬಾಪುಜೀ
ವಿಶ್ವಪ್ರೇಮಿ ಗಾಂಧಿಜೀ

---

## ಚಿಟ್ಟೆ

ಬಣ್ಣಬಣ್ಣದಿ ಕೂಡಿ ಮೆರೆಯುವ
ಚಿಟ್ಟೆ ಬಾರೆಲೆ ಹಾರುತ
ಬಿಳುಪು ಹೊಳಪಿನ ಕಪ್ಪುಒಪ್ಪಿನ
ಚುಕ್ಕಿ ರೆಕ್ಕೆಯ ತೋರುತ

ನೀಲಿ ಹಳದಿಯು ಹಸುರು ನೇರಳೆ
ಬಣ್ಣ "ಮಿರಿಮಿರಿ" ಮೆರೆವುದು
ಕುಸುಮ ಕುಸುಮಕೆ ಹಾರಿ ಜೀವಿಸಿ
ನಿನ್ನ ಜೀವನ ಹರಿವುದು

ಸೊಗದ ನಿನ್ನಯ ಬಣ್ಣ ಬೆಡಗಿಗೆ
ಜಗದ ಜನತೆಯು ಸೋಲ್ವುದು
ನಿನ್ನ ಬಾಳಿನ ಸುಖದ ಸುಗ್ಗಿಯ
ಪಡೆವ ಭಾಗ್ಯವ ಬೇಳ್ವುದು

ಚಣದ ಕಾಲದಿ ಸುಮದ ತೆರದಲಿ
ಜನರ ಮೋಹಿಸಿ ಬಾಳುವೆ
ಸುಮದ ಸಂಗಡ ಕ್ರೀಡಿಸುತ್ತಲಿ
ನಿನ್ನ ಬಾಳನು ಕಳೆಯುವೆ

---

## ಹಬ್ಬ ಬಂದಿತು

ದುಗುಡವ್ಹೋಡಿಸಿ ಹರುಷ ಮೂಡಿಸಿ
ಹಬ್ಬ ಬಂದಿತು ಊರಿಗೆ!
ಚಿನ್ನದೊಡವೆಯು ಬಣ್ಣದುಡುಗೆಯು
ತೊಡಲಿಕಿಲ್ಲವು ಯಾರಿಗೆ!

ಬಡವ ಬಲ್ಲಿದ ಧನಿಕ ತಿರುಕನು
ಎನುವ ಭೇದವೆ ಕಾಣದೆ
ಎಲ್ಲಾ ಸಿರಿತನ ಸುತ್ತ ಸಂಭ್ರಮ
ಧರೆಯು ಹೊಸತನ ತಾಳಿದೆ

ಬೇನೆ ಬೇಸರ ಕಳೆದು ಸಕಲರ
ನಗಿಸೆ ಹಬ್ಬವು ಬಂದಿದೆ
ಹಾಳು ಕಳೆಯಿಸಿ ಚೆಲುವ ಬೆಳೆಯಿಸಿ
ಮೆರೆವ ಸರದಿಯ ತಂದಿದೆ

ಸುತ್ತ ಸಿಂಗರ ಜನಕೆ ಸಡಗರ
ತುಂಬು ತೋಷವೆ ತುಂಬಿದೆ
ಹಬ್ಬದೂಟದಿ ತೋಷಕೂಟದಿ
ಜನರ ನಲಿಸುತ ನಿಂದಿದೆ

ನಾಡೊಳನುದಿನ ಜನತೆಯೆಲ್ಲವು
ತುಂಬು ಹರುಷದಿ ಮೆರೆಯಲಿ
ನಾಡ ಬಡತನವೆಂಬ ಭೂತವು
ಓಡಿ ಸಿರಿತನ ನೆಲಸಲಿ

## ವೀರಾ ಬಾಯಿ

ವೀರರ ರಾಣಿಯೆ ವೀರಾ ಬಾಯಿಯೆ
"ಸಿಂಹಿಣಿ" ಎಂಬುದು ನೀ ದಿಟವು
ಚಿತ್ತೂರೊಡೆಯನ ಪತ್ನಿಯು ಆಗಿಯೆ
ಸತ್ತೂ ಬದುಕಿದೆ ಇದು ದಿಟವು

ಅಂದಿನ ಢಿಲ್ಲಿಯು ರಾಜನು ಅಕ್ಬರ
ಜಂಭದಿ ರಾಜ್ಯವ ಮುತ್ತಿದನು
ಎತ್ತಲು ನೋಡಲು ಸೇನೆಯು ಮುಗಲರ
ಅಲ್ಪವೆ ನಿನ್ನದು ಮತ್ತೇನು!

ಅಂಜದೆಯಳುಕದೆ ವೈರಿಗೆ ಬಾಗದೆ
ಸಾಗಿದೆ ಧೀರಳೆ ಯುದ್ಧದೆಡೆ—
ಜಟ್ಟಿಯ ಬಿಗಿಯುತ ಯೋಧನ ತೆರದಲಿ
ನೆಟ್ಟಗೆ ಕಾದಿದೆ ವೈರಿಯೆಡೆ

ಕತ್ತಿಯ ಬೀಸುತ ಅರಿಗಳ ತರಿಯುತ
ನೆತ್ತರ ಕಾಲುವೆ ಹರಿಯಿಸಿದೆ
ಉತ್ತಮ ಯೋಧಳು ವೀರಳು ಎನ್ನುವ
ಬಿತ್ತರ ಹೊಗಳಿಕೆ ಕೇಳಿಸಿದೆ

ರಾಜನು ನೋಡುತ ಸೋಜಿಗಪಡುತಲಿ
ಓಡಿದ ಯುದ್ಧವ ಕೊನೆಗೊಳಿಸಿ
ನಾಡಿಗೆ ನಾಡೇ ನಿನ್ನನ್ನು ಹೊಗಳಿತು
ಬೇಡುತ ಈಶನ ದಯೆಯೆನಿಸಿ

ಸಾಸಿರ ಸಾಸಿರ ಧೀರೆಯರುದಿಸಲಿ
ನಮ್ಮ ಭಾರತ ಭೂಮಿಯಲಿ
ಮಾಸದ ಯಶವನು ಗಳಿಸುತ ಮೆರೆಯಲಿ
ಮಾತೆಯ ಸೇವೆಯ ಗೈಯುತಲಿ

## ರವಿಯುದಯ



ಕಪ್ಪಿನಾ ಕತ್ತಲೆಯು ಮುಪ್ಪನ್ನು ಅಪ್ಪುತಿರೆ
ಕೋಳಿ ಕೂಗಿತು ಬೆಳಗಾಯಿತೆಂದು
ಎಲ್ಲೆಲ್ಲು ನಸುಬೆಳಕು ಮೂಸಿಹುದು ಉಡುಥಳಕು
"ಚಿಲಿಪಿಲಿಯು ಕೇಳುತಿದೆ ತೂರಿಬಂದು

ಬಡಜನವು ಬಿಡದೆದ್ದು ತೊಡಗಿಹುದು ಕೆಲಸಕ್ಕೆ
ಹೊರಬೀಳಲೆಸಗುವರು ಮನೆಯು ಬಿಟ್ಟು
ಅರುಣನನು ಮುಂದಿರಿಸಿ ರವಿಯು ತಾನೇರಿದನು
ಸುಡುವಂಥ ಕೆಂಡದಾ ಕಣ್ಣು ಬಿಟ್ಟು

ಆ ಕೊಳದಿ ಚೆಲುವೆಸೆವ ತಾವರೆಯು ತಾನರಳಿ
ಸಖ ಬಂದನೆಂದೆಂದು ನಗುತಿದ್ದಿತು
ಕೆಂಪೆಸೆವ ಇನಕಿರಣದಾಸೆಯಲಿ ಇನಕಾಂತಿ
ಕಂಪಿತ್ತು ಅರಳಲನುವಾಗಿದ್ದಿತು

ಕತ್ತಲೆಯ ಮುತ್ತಿಗೆಗೆ ತತ್ತರಿಸಿದಾ ಜನಕೆ
ಬಿತ್ತರದ ಚಿರತೋಷದೆಣಿಕೆ ತೋರಿ
ಬಲುಚಂದದಾನಂದ ಸೃಷ್ಟಿ ಚೆಲುವನು ನೀಡಿ
ಬೆಳಗಾಯ್ತು ಬುವಿಯಲ್ಲಿ ಕಲೆಯು ಬೀರಿ

---

## ನಮ್ಮೂರ ಜಾತ್ರೆ

ನಮ್ಮಯ ಊರಿನ ಜಾತ್ರೆಯು ಬರಲು
ಊರಿನ ಜನರಿಗೆ ಆನಂದಃ

ಸಿಂಗರದೆಸಕದ ಮನೆಮನೆಯಲ್ಲಿ
ಮನೆಮಾಡಿರುವುದ ಆನಂದಃ

ಹಿರಿಯನು ಕಿರಿಯನು ಧನಿಕನು ತಿರುಕನು
ಹೊಸ ಹೊಸ ಉಡುಪನು ಧರಿಸಿಹರು
ಔತಣದೂಟದ ಸವಿಯನು ಸವಿಯುತ
ಎಲ್ಲರು ಹರುಷದಿ ತುಂಬಿಹರು

ಮಿಠಾಯಿಯಂಗಡಿ ಕಾಫಿಯ ಹೋಟೆಲು
ಎಲ್ಲವು ನೆರೆದಿವೆ ಬಂದಿಲ್ಲಿಃ
ಕಿರಿಯರ ಆಟದ ಹಿರಿಯರ ಕೂಟದ
ವಸ್ತುಗಳಿವೆ ಬಾ ನೋಡಲ್ಲಿಃ

ಎಲ್ಲರ ಮನೆಯಲಿ ನೆಂಟರು ಇಷ್ಟರು
ಔತಣದೂಟಕೆ ಬಂದಿಹರುಃ
ಪರಿಪರಿ ಭಕ್ಷ್ಯಗಳಿಂದಲಿ ಕೂಡಿಹ
ಪಾಯಸದೂಟವನುಂಡಿಹರುಃ

ಊರಿನ ಜನವನು ತೋಷದಿ ಮುಳುಗಿಸೆ
ಊರಿನ ಜಾತ್ರೆಯು ಬಂದಿಹುದು
ಜನತೆಯು ಹರುಷದಿ ನಲಿನಲಿದಾಡುತ
ಹೊರಗಿನ ಜಗವನೆ ಮರೆತಿಹುದು

---

## ಕನ್ನಡಾಂಬೆ ನಮ್ಮ ಮಾತೆ

(ಓಃಃಃ ವಸಂತಮಾಸ ಓಡಿ ಬಂದಿದೆಃ.... ಎಂಬಂತೆ)

ಓಃಃಃ ಕನ್ನಡಾಂಬೆ ನಮ್ಮ ಮಾತೆಯುಃ
ನಮ್ಮ ಮಾತೆಯುಃ ಪರಮಪೂತೆಯುಃಃ (ಓಃಃಃ)

ಸೊಂಪುಪೆಂಪಿಽನ ಮಂಗಽಲ ನಾಡು
ಕಂಪುತಂಪಿಽನ ಸುಮಗಽಳ ಬೀಡು
ಬುವಿಯು ಕೀರ್ತಿಽ ನಾಡು
ಭವಿಯ ಮೂರ್ತಿಽ ಬೀಡು
ಈವ ಸ್ಫೂರ್ತಿಽ ನಾಡು (ಓಽಽಽ)
ಶ್ರೇಷ್ಠ ಭೋಜಽನು ಆಳಿಽದ ನಾಡು
ಎಷ್ಟೊ ರಾಜಽರು ಬೆಳಗಿಽದ ಬೀಡು
ಕಳೆಯು ಕಳಸ್ವಽ ನಾಡು
ಇಳೆಯೊಳಿಸೆವ್ವಽ ಬೀಡು
ಭಳಿರೆ ನಮ್ಮಽ ನಾಡು (ಓಽಽಽ)
ಸೃಷ್ಟಿ ಸುಂದಽರ ಕನ್ನಽಡ ನಾಡು
ತುಷ್ಟಿ ಮಂದಿಽರ ನಮ್ಮಽಯ ಬೀಡು
ಗಿರಿಯು ಝುರಿಯಽ ನಾಡು
ತೊರೆಯು ಹರಿವಽ ಬೀಡು
ಸಿರಿಯು ಮೆರೆವಽ ನಾಡು (ಓಽಽಽ)
ಹಿಂದು ಮುಸ್ಲಿಽಮ ಕ್ರೈಸ್ತಽರು ಕೂಡಿ
ಒಂದುಗೂಡುಽತ ನಲಿಯುಽವ ಪಾಡಿ
ಜಾತಿಭೇದಽ ದೂಡಿ
ಮಾತೆಸೇವೆಽ ಮಾಡಿ
ಖ್ಯಾತಿಪಡೆವಽ ಕೂಡಿ (ಓಽಽಽ)

## ಸರ್ದಾರ ಪಟೇಲ

ಭರತಮಾತೆಯುದರದಲ್ಲಿ
ಜನಿಸಿದೆಯು ಪಟೇಲನೆ
ಜೀವದಾನ "ತಾಯಿ"ಗಿತ್ತು
ಸೇವೆಗೈದೆ ಮಾನ್ಯನೆ

ಪಾರತಂತ್ರ್ಯ ಕಳೆಯಲೆಂದು
ಅಹೋರಾತ್ರಿ ಹೆಣಗಿದೆ
ಹಡೆದ ತಾಯಸೇವೆಗಾಗಿ
ಬಿಡದೆ ಶ್ರಮವ ವಹಿಸಿದೆ

ನಮ್ಮ ನಾಡ ನಾವೆ ಆಳ್ವ
ಹೆಮ್ಮೆಯನ್ನು ಗಳಿಸಿದೆ
ಒಡೆದ ನಾಡನೊಂದು ಮಾಡಿ
ಕಡೆಯತನಕ ಸೆಣಸಿದೆ

ಗಣ್ಯ ನೀನೆ ನಮ್ಮ ನಾಡ
ಪುಣ್ಯಪುರುಷ ಜ್ಯೋತಿಯು!
ತ್ಯಾಗಶೀಲ ಧೈರ್ಯವಂತ
ಭೋಗರಹಿತ ಮೂರ್ತಿಯು!

ನಿನ್ನ ತೆರದ ವೀರಕುಲವು
ನಮ್ಮ ನೆಲದೊಳುದಿಸಲಿ
ನಿನ್ನ ದಾರಿಯಲ್ಲೆ ನಡೆದು
ನಮ್ಮ ನಾಡ ಮೆರೆಸಲಿ

---

## ತಾವರೆ



ನನೆಯು ಬಿರಿವ ತಾವರೆ
ಮುಗುಳು ನಗೆಯ ನಗುತಿದೆ ॥ ಪ ॥

ನೀರು ತುಂಬಿ ತುಳುಕುತಿರುವ
ಕೊಳದಿ ಲಾಸ್ಯವಾಡುತ
ರವಿಯು ಕಿರಣದೋರೆ ಇಣಿಕಿ
ಯಾರು ಎಂದು ನೋಡುತ

ಸಖನ ಬರಕೆ ಮೊಗವನರಳಿ
ಶೋಭೆಯಿಂದ ಕೂಡುತ
ಚೆಲುವು ತುಂಬಿ ನಗುತ ರಸಿಕ
ದುಂಬಿಯನ್ನು ಸೆಳೆಯುತ

ಹಕ್ಕಿಯೆರಡು ನೀರಿನಲ್ಲಿ
ರೆಕ್ಕೆ ಬಡಿದು ಮಿಂದುವು
ನೀರ ಹನಿಯು ಸುಮದ ಕಂಪು
ಸೇರಿ ಅನಿಲ ಮಂದವು

ಇನಿತು ಕಂಪು ತಂಪು ಈವ
ಎಲರ ತೀಟ ಅಂದ
ಭ್ರಮರ ಸುಮದ ಸುತ್ತುಸುಳಿಯೆ
ಭ್ರಮೆಯಗೊಳಿಪ ಚಂದವು

---

## ಭಾರತ

ಸೊಗದ ಬೀಡು ನಮ್ಮ ನಾಡು
ಜಗದಿ ಮೆರೆವ ಭಾರತ
ಚೆನ್ನ ನಾಡು ಹೊನ್ನ ಬೀಡು
ಗಣ್ಯ ನಾಡು ಭಾರತ

ಇಳೆಯ ಸೊಂಪು ಕಳೆಯ ಪೆಂಪು
ಹೊಳೆಯುತೆಸೆವ ಭಾರತ
ಪುಣ್ಯಪುರುಷರಿಳೆಗೆ ಹರುಷ
ತೋರಿ ಮೆರೆದ ಭಾರತ

ವೀರ, ಧೀರ ಶೌರ್ಯವಂತ
ರುದಿಸಿ ಬಳೆದ ಭಾರತ
ತ್ಯಾಗಿ ಯೋಗಿ ಯತಿಗಳಿಂದ
ಯಶವ ಪಡೆದ ಭಾರತ

ಗಾಂಧಿ, ನೆಹರು, ಬೋಸರನ್ನು
ಹಡೆದ ಮಾತೆ ಭಾರತ
ಸತ್ಯ ಶಾಂತಿ ಮಹಿಮೆಯನ್ನು
ನಿತ್ಯ ಸಾರ್ವ ಭಾರತ



Edited, Printed & Published by K. V. Shenoy
at The Prabhat Printers Ltd., Mangalore.